## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1568
ಸದಸ್ಯರ ಹೆಸರು : ಡಾ|| ವೈ.ಎ. ನಾರಾಯಣಸ್ವಾಮಿ
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 11.03.2022.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರು ನಗರದಲ್ಲಿ ಸಂಚಾರ ನಡೆಸಲು ಯೋಗ್ಯವಿರುವ ಬಿ.ಎಂ.ಟಿ.ಸಿ ಬಸ್ಸುಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯಲ್ಲಿ ದಿನಾಂಕ:07.03.2022 ರಂತೆ ಲೇಲಾಂಡ್, ಟಾಟಾ, ಐಷರ್, ವೋಲ್ವೋ ಹಾಗೂ ಕರೋನಾ ಮಾದರಿಯ ಒಟ್ಟು 6643 ಬಸ್ಸುಗಳು ಬೆಂಗಳೂರು ನಗರದಲ್ಲಿ ಸಂಚಾರ ನಡೆಸಲು ಯೋಗ್ಯವಿರುತ್ತವೆ. |
| ಆ. | ನಗರದಲ್ಲಿ ಬಸ್ಸುಗಳ ಸಂಚಾರಕ್ಕೆ ನಿಗದಿಪಡಿಸಿದ ರೂಟ್ (ಮಾರ್ಗಗಳ) ಸಂಖ್ಯೆ ಎಷ್ಟು; ಈ ಎಲ್ಲಾ ಮಾರ್ಗಗಳಲ್ಲಿ ಎಷ್ಟು ತಂಗುದಾಣಗಳಿವೆ; (ವಿವರ ನೀಡುವುದು) | ಬೆಂ.ಮ.ಸಾ.ಸಂಸ್ಥೆಯಿಂದ ಬಸ್ಸುಗಳ ಸಂಚಾರಕ್ಕೆ ಫೆಬ್ರವರಿ-2022 ರ ಮಾಹೆಯ ಅಂತ್ಯದಲ್ಲಿ ನಿಗದಿಪಡಿಸಿದ ರೂಟ್ (ಮಾರ್ಗಗಳ) ಸಂಖ್ಯೆ1856.<br>ಸಂಸ್ಥೆಯ ಆಚರಣಾ ವ್ಯಾಪ್ತಿಯಲ್ಲಿ ಒಟ್ಟು 8666 ಬಸ್ ನಿಲುಗಡೆಗಳಿರುತ್ತವೆ.<br>ಬೆಂ.ಮ.ಸಾ.ಸಂಸ್ಥೆಯು ಕೋರಿರುವ 2212 ಸ್ಥಳಗಳಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ಒಟ್ಟು 886 ತಂಗುದಾಣಗಳು ಪೂರ್ಣಗೊಂಡಿದ್ದು, 700 ತಂಗುದಾಣಗಳ ನಿರ್ಮಾಣ ಪ್ರಗತಿಯಲ್ಲಿದೆ.<br>ತಂಗುದಾಣಗಳ ವಿವರಗಳನ್ನು 'ಅನುಬಂಧ' ದಲ್ಲಿ ನೀಡಲಾಗಿದೆ. |
| ಇ. | ಬಸ್ಸುಗಳ ವಾಹನ ಚಾಲಕರು ಬಸ್ ನಿಲ್ದಾಣ/ತಂಗುದಾಣಗಳಲ್ಲಿ ಸರಿಯಾಗಿ ವಾಹನ ನಿಲುಗಡೆ ಮಾಡಿ ಇತರೆ ವಾಹನಗಳ ಸಂಚಾರಕ್ಕೆ ಅನುವು ಮಾಡುವ ಕುರಿತು ಯಾವುದಾದರೂ ಮಾನದಂಡಗಳನ್ನು | ಅಧಿಕೃತ ಬಸ್ ನಿಲುಗಡೆ/ ತಂಗುದಾಣಗಳ ಬಳಿ ಇತರೆ ವಾಹನಗಳ ಸುಗಮ ಸಂಚಾರಕ್ಕೆ ತೊಂದರೆಯಾಗದಂತೆ ಬಸ್ಸುಗಳನ್ನು ವ್ಯವಸ್ಥಿತವಾಗಿ ನಿಲ್ಲಿಸಿ, ಪ್ರಯಾಣಿಕರನ್ನು ಇಳಿಸಿ/ ಹತ್ತಿಸಿಕೊಂಡು ಕಾರ್ಯಾಚರಣೆ ಮಾಡುವಂತೆ ಚಾಲನಾ ಸಿಬ್ಬಂದಿಗಳಿಗೆ ಸೂಕ್ತ |

| | | |
|---|---|---|
| | ಅನುಸರಿಸಲಾಗುತ್ತಿದೆಯೇ; ಹಾಗೂ ಇದರ ಕುರಿತು ಚಾಲಕರಿಗೆ ಸೂಕ್ತ ತರಬೇತಿ ನೀಡಲಾಗಿದೆಯೇ; (ವಿವರ ನೀಡುವುದು) | ತಿಳುವಳಿಕೆ ನೀಡಲಾಗಿದೆ.<br><br>ಚಾಲನಾ ಸಿಬ್ಬಂದಿಗಳಿಗೆ ಸುರಕ್ಷಿತ ಚಾಲನೆ ಮತ್ತು ರಸ್ತೆ ಸುರಕ್ಷತಾ ಸಂಚಾರ ನಿಯಮಗಳನ್ನು ಪಾಲಿಸುವ ಕುರಿತು ಸಂಸ್ಥೆಯ ತರಬೇತಿ ಕೇಂದ್ರದಲ್ಲಿ ಕಾಲಕಾಲಕ್ಕೆ ತರಬೇತಿಯನ್ನು ನೀಡಲಾಗುತ್ತಿದೆ.<br><br>ಎಲ್ಲಾ ಪ್ರಮುಖ ರಸ್ತೆಗಳಲ್ಲಿ ಸಾರಥಿ ಗಸ್ತುಪಡೆ ಸಂಚಾರ ಸಿಬ್ಬಂದಿಗಳನ್ನು ನಿಯೋಜಿಸಿ ಮೇಲುಸ್ತುವಾರಿ ನಡೆಸಿ ಚಾಲನಾ ಸಿಬ್ಬಂದಿಗಳಿಗೆ ನಿರಂತರವಾಗಿ ಅರಿವು ಮೂಡಿಸಲಾಗುತ್ತಿದೆ. |
| ಈ. | ಬಸ್ ನಿಲ್ದಾಣಗಳಲ್ಲಿ /ತಂಗುದಾಣಗಳಲ್ಲಿ ಸಿಸಿಟಿವಿ/ ಕ್ಯಾಮೆರಾಗಳನ್ನು ಅಳವಡಿಸಲಾಗಿದೆಯೇ; ಮತ್ತು ಪ್ರಯಾಣಿಕರಿಗೆ ಕುಡಿಯುವ ನೀರಿನ ವ್ಯವಸ್ಥೆ ಹಾಗೂ ಇತರೆ ಸೌಲಭ್ಯಗಳನ್ನು ಕಲ್ಪಿಸಲಾಗಿದೆಯೇ? | ಬೆಂ.ಮ.ಸಾ.ಸಂಸ್ಥೆಯ ಪ್ರಮುಖ ಬಸ್ ನಿಲ್ದಾಣಗಳಲ್ಲಿ ಸಿ.ಸಿ.ಟಿ.ವಿ ಕ್ಯಾಮೆರಾಗಳನ್ನು ಅಳವಡಿಸಲಾಗಿದೆ ಹಾಗೂ ಎಲ್ಲಾ ಬಸ್ ನಿಲ್ದಾಣಗಳಲ್ಲಿ ಪ್ರಯಾಣಿಕರಿಗೆ ಕುಡಿಯುವ ನೀರಿನ ವ್ಯವಸ್ಥೆ ಮತ್ತು ಇತರೆ ಅಗತ್ಯ ಸೌಲಭ್ಯಗಳನ್ನು ಕಲ್ಪಿಸಲಾಗಿದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ಪಿ.ಪಿ.ಪಿ ಆಧಾರದ ಖಾಸಗಿ ಸಹಭಾಗಿತ್ವದಲ್ಲಿ ಕೈಗೊಳ್ಳುತ್ತಿರುವ ಬಸ್ ತಂಗುದಾಣಗಳ ನಿರ್ಮಾಣದ ಆಯ್ದ ಸ್ಥಳಗಳಲ್ಲಿ ಶೌಚಾಲಯ ಹಾಗೂ ನೀರಿನ ವ್ಯವಸ್ಥೆ ಕಲ್ಪಿಸಲು ಉದ್ದೇಶಿಸಿದ್ದು, ಬಸ್ ತಂಗುದಾಣಗಳಲ್ಲಿನ ಸ್ಥಳದ ಕೊರತೆ/ ಅಭಾವದಿಂದ ಹಿನ್ನೆಡೆಯುಂಟಾಗಿದ್ದು, ಈ ವ್ಯವಸ್ಥೆ ಕಲ್ಪಿಸಲು ಪಾಲಿಕೆ ವತಿಯಿಂದ ಕ್ರಮ ಕೈಗೊಳ್ಳಲಾಗುತ್ತಿರುತ್ತದೆ.<br><br>ಪೊಲೀಸ್ ಇಲಾಖೆ ವತಿಯಿಂದ "ನಿರ್ಭಯ ಯೋಜನೆಯ" ಸೇಫ್‌ಸಿಟಿ ಪ್ರಾಜೆಕ್ಟ್ ಮುಖಾಂತರ ನಗರದಾದ್ಯಂತ ಸಿ.ಸಿ.ಟಿ.ವಿ/ ಕ್ಯಾಮೆರಾಗಳನ್ನು ಅಳವಡಿಸಲು ಕ್ರಮ ಕೈಗೊಂಡಿರುವುದರಿಂದ, ಪಾಲಿಕೆ ವತಿಯಿಂದ ನಿರ್ಮಿಸುತ್ತಿರುವ ಬಸ್ ತಂಗುದಾಣಗಳಲ್ಲಿ ಸಿಸಿಟಿವಿ/ ಕ್ಯಾಮೆರಾಗಳನ್ನು ಅಳವಡಿಸಲು ಯೋಜಿಸಿರುವುದಿಲ್ಲ ಹಾಗೂ ಪಿ.ಪಿ.ಪಿ. ಆಧಾರದ ಖಾಸಗಿ ಸಹಭಾಗಿತ್ವದಲ್ಲಿ |

| | | |
|---|---|---|
| | | ನಿರ್ಮಿಸುತ್ತಿರುವ ಬಸ್ ತಂಗುದಾಣಗಳಲ್ಲಿ ಪ್ರಯಾಣಿಕರ ಮಾಹಿತಿಗಾಗಿ ಬಸ್ ಮಾರ್ಗದ ವಿವರಣೆ ಮತ್ತು ಸ್ಥಳ ನಕ್ಷೆ ಹಾಗೂ ಬಸ್ ತಂಗುದಾಣ ಪ್ರದೇಶದ ಹೆಸರಿನ (Public Information System) ಮಾಹಿತಿಯನ್ನು ಅಳವಡಿಸಲಾಗಿರುತ್ತದೆ. |

ಸಂಖ್ಯೆ: ಟಿಡಿ 73 ಟಿಸಿಕ್ಯೂ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

ಅನುಬಂಧ-1

# BRUHATH BANGALORE MAHANAGARA PALIKE

## DESIGN, BUILD, OPERATE(MAINTAINANCE) & TRANSFER OF BUS - QUEUE - SHELTERS ON DBOT BASIS FOR 20 years

| Sl.no | Name of the Package | Bus Shelter | | | Remarks |
|---|---|---|---|---|---|
| | | No of Bus Shelter Alloted | No of Bus Shelter Completed | No of Bus Shelter In progress | |
| 1 | BUS - QUEUE - SHELTERS ON DBOT BASIS-**Package A** | 562 | – | 188 | 374 no of bus shelters locations to be constructed in coordination with BMTC & Bangalore Traffic Police |
| 2 | BUS - QUEUE - SHELTERS ON DBOT BASIS-**Package B** | 550 | 338 | 190 | 22 no of bus shelters locations to be constructed in coordination with BMTC & Bangalore Traffic Police |
| 3 | BUS - QUEUE - SHELTERS ON DBOT BASIS-**Package C** | 550 | 245 | 150 | 155 no of bus shelters locations to be constructed in coordination with BMTC & Bangalore Traffic Police |
| 4 | BUS - QUEUE - SHELTERS ON DBOT BASIS-**Package D** | 550 | 303 | 172 | 75 no of bus shelters locations to be constructed in coordination with BMTC & Bangalore Traffic Police |
| | | **2212** | **886** | **700** | |

Traffic Engineering [illegible]
Bruhath Bengaluru Mahanagar Palike
Bengaluru 560 002